# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1445
ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 19.03.2020
ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೇಶ ಮತ್ತು ರಾಜ್ಯದಲ್ಲಿರುವ ಮಧ್ಯಮ ಪ್ರಮಾಣದ ಉದ್ಯಮಗಳು, ಸೂಕ್ಷ್ಮ, ಮಧ್ಯಮ ಮತ್ತು ಸಣ್ಣ ಉದ್ಯಮಗಳ (MSME) ಬೆನ್ನೆಲುಬಾಗಿ ರೂಪುಗೊಳ್ಳುತ್ತಿರುವುದು ನಿಜವೇ; | ಹೌದು. |
| ಆ) | ಇತ್ತೀಚಿನ ವರ್ಷಗಳಲ್ಲಿ ನಮ್ಮ ದೇಶದ ನೆರೆ ರಾಷ್ಟ್ರಗಳಾದ ಚೀನಾ, ವಿಯೆಟ್ನಾಂ ಮತ್ತು ಬಾಂಗ್ಲಾ ದೇಶದಂತಹ ದೇಶಗಳು ಬಹುತೇಕವಾಗಿ ಸುಲಭ ದರದಲ್ಲಿ ಮತ್ತು ತಕ್ಷಣದಲ್ಲಿ ದೊರೆಯುವ ದುಡಿಮೆದಾರರ ಶಕ್ತಿಯನ್ನು ಬಳಸಿ ಮಧ್ಯಮ ಮಾರುಕಟ್ಟೆಯಲ್ಲಿ ರಫ್ತು ಮಾಡುವ ಉದ್ದೇಶದಿಂದ ಮಧ್ಯಮ ಪ್ರಮಾಣದ ಉದ್ಯಮಗಳಿಗೆ ಉತ್ತೇಜನ ನೀಡಿ ವಿಶ್ವ ಮಾರುಕಟ್ಟೆಯಲ್ಲಿ ರಫ್ತು ಪಾಲನ್ನು ಹೆಚ್ಚಿಸಲು ಕ್ರಮ ಕೈಗೊಂಡಿರುವುದು ನಿಜವೇ; | ಕಳೆದ ಮೂರು ವರ್ಷಗಳಲ್ಲಿ ಚೀನಾ, ವಿಯೆಟ್ನಾಂ ಮತ್ತು ಬಾಂಗ್ಲಾದೇಶಗಳಿಂದ ಪ್ರಮುಖ ಉತ್ಪನ್ನಗಳ ರಫ್ತಿನ ವಿವರಗಳು ಈ ಕೆಳಕಂಡಂತೆ ಇರುತ್ತದೆ. ಮೌಲ್ಯ (ಅಮೇರಿಕಾದ ಬಿಲಿಯನ್ ಡಾಲರ್‌ನಲ್ಲಿ) (ಕೆಳಗಿನ ಕೋಷ್ಟಕಗಳನ್ನು ನೋಡಿ) |

ಮೌಲ್ಯ (ಅಮೇರಿಕಾದ ಬಿಲಿಯನ್ ಡಾಲರ್‌ನಲ್ಲಿ)

**ಚೀನಾ ದೇಶ**

| ಕ್ರಸ. | ಉತ್ಪನ್ನ | ವರ್ಷ | | |
|---|---|---|---|---|
| | | 2016–17 | 2017–18 | 2018–19 |
| 1 | ಸಿದ್ಧಪಡಿಸಿದ ಉಡುಪುಗಳು | 139 | 140 | 145 |
| 2 | ಬೊಂಬೆಗಳು | 52 | 55 | 57 |
| 3 | ಸಿದ್ಧಪಡಿಸಿದ ಜವಳಿ | 25 | 26 | 28 |
| 4 | ಮೀನುಗಾರಿಕೆ ಪದಾರ್ಥಗಳು | 13 | 13 | 14 |

**ವಿಯೆಟ್ನಾಂ ದೇಶ**

| ಕ್ರಸ. | ಉತ್ಪನ್ನ | ವರ್ಷ | | |
|---|---|---|---|---|
| | | 2016–17 | 2017–18 | 2018–19 |
| 1 | ಸಿದ್ಧಪಡಿಸಿದ ಉಡುಪುಗಳು | 22 | 24 | 28 |
| 2 | ಪಾದರಕ್ಷೆಗಳು | 13.4 | 15 | 16 |
| 3 | ಮೀನುಗಾರಿಕೆ ಪದಾರ್ಥಗಳು | 5.2 | 6.1 | 6.4 |
| 4 | ಗೋಡಂಬಿ | 2.7 | 3.4 | 3.1 |

| ಬಾಂಗ್ಲಾ ದೇಶ | | | | |
|---|---|---|---|---|
| ಕ್ರ.ಸ. | ಉತ್ಪನ್ನ | ವರ್ಷ | | |
| | | 2016–17 | 2017–18 | 2018–19 |
| 1 | ಸಿದ್ಧಪಡಿಸಿದ ಉಡುಪುಗಳು | 32.8 | 33.5 | 38 |
| 2 | ಸಿದ್ದಪಡಿಸಿದ ಜವಳಿ | 0.98 | 1.13 | 1.10 |
| 3 | ಪಾದರಕ್ಷೆಗಳು | 0.92 | 0.97 | 1.05 |

ಟಿಪ್ಪಣಿ: ಈ ಮೇಲಿನ ಮಾಹಿತಿಯು **DGCIS, Government of India, Kolkata, & Trade map (Trade statistics for international business development)** ರವರ ಮಾಹಿತಿ ಆಧರಿಸಿದೆ.

| | | |
|---|---|---|
| ಇ) | ರಾಜ್ಯದಲ್ಲಿ ತನ್ನ ರಫ್ತು ಪಾಲನ್ನು ಹೆಚ್ಚಿಸಲು ಮಧ್ಯಮ ಪ್ರಮಾಣದ ಉದ್ಯಮಗಳನ್ನು ಉತ್ತೇಜನ **ನೀಡಲು** ಸರ್ಕಾರ **ಯೋಚಿಸುತ್ತಿದೆಯೇ;** ಹಾಗಿದ್ದಲ್ಲಿ, ಸಂಪೂರ್ಣ **ಮಾಹಿತಿ** ನೀಡುವುದು; | ರಾಜ್ಯದ ಉತ್ಪನ್ನಗಳ ರಫ್ತನ್ನು **ಹೆಚ್ಚಿಸಲು** ಈ ಕೆಳಕಂಡ ಪರಿಣಾಮಕಾರಿ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ:<br><br>1. ರಾಜ್ಯದ ವಿವಿಧ **ಜಿಲ್ಲೆಗಳಲ್ಲಿ** ಉತ್ಪನ್ನ ಆಧಾರಿತ ಕ್ಲಸ್ಟರ್‌ಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ.<br>2. ಸೇವಾರಫ್ತು ವಲಯ **ಉತ್ತೇಜನಕ್ಕಾಗಿ** ಸರ್ವಿಸಸ್ ಎಕ್ಸ್‌ಪೋರ್ಟ್ ಸ್ಟ್ರಾಟಿಜಿ ಹೊರತರಲಾಗಿದೆ.<br>3. ಕೃಷಿ ರಫ್ತು **ಉತ್ತೇಜನಕ್ಕಾಗಿ** ಕೇಂದ್ರ ಸರ್ಕಾರದ ಕೃಷಿ ರಫ್ತು ನೀತಿ ಅನುಷ್ಠಾನಗೊಳಿಸಲು ರಾಜ್ಯದ ಕ್ರಿಯಾಯೋಜನೆಯನ್ನು ರೂಪಿಸಲಾಗ್ಗಿದೆ.<br>4. ಭೌಗೋಳಿಕ ಉತ್ಪನ್ನಗಳ **ಉತ್ತೇಜನಕ್ಕಾಗಿ** ಭೌಗೋಳಿಕ ಗುರುತುಗಳ ನೀತಿಯನ್ನು ಹೊರತರಲಾಗಿದೆ.<br>5. ಉತ್ಪನ್ನಗಳ ರಫ್ತು ಉತ್ತೇಜನಕ್ಕಾಗಿ **ಎಕ್ಸ್‌ಪೋರ್ಟ್** ಸ್ಟ್ರಾಟಿಜಿ ಹೊರತರಲಾಗುತ್ತಿದೆ.<br>6. ಜಿಲ್ಲಾ ಮಟ್ಟದಲ್ಲಿ ಹಾಗೂ **ರಾಜ್ಯ** ಮಟ್ಟದಲ್ಲಿ ರಫ್ತು ಜಾಗೃತಿ ಶಿಬಿರಗಳನ್ನು ಮತ್ತು ರಫ್ತು ನಿರ್ವಹಣಾ **ತರಬೇತಿ** ಕಾರ್ಯಕ್ರಮಗಳನ್ನು ಕೈಗಾರಿಕೋದ್ಯಮಿಗಳಿಗೆ / ವ್ಯಾಪಾರಸ್ಥರಿಗೆ ಆಯೋಜಿಸ**ಲಾಗುತ್ತಿದೆ.**<br>7. ಕೇಂದ್ರ ಸರ್ಕಾರದ ಇಲಾ**ಖೆಗಳಾದ ಡಿಜಿಎಫ್‌ಟಿ,** ಕಸ್ಟಮ್ಸ್ ಹಾಗೂ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್‌ಗಳು ಮತ್ತು **ರಫ್ತುಕ್ಷೇತ್ರಗಳ** ಸಂಸ್ಥೆಗಳೊಂದಿಗೆ ಸಮನ್ವಯ ಸಭೆಗಳನ್ನು ಏರ್ಪಡಿಸ**ಲಾಗುತ್ತಿದೆ.**<br>8. ಅಂತರರಾಷ್ಟ್ರೀಯ **ವ್ಯಾಪಾರ / ವಸ್ತು** ಪ್ರದರ್ಶನದಲ್ಲಿ ಕೈಗಾರಿಕೋದ್ಯಮಿಗಳು ಭಾಗವಹಿಸುವುದಕ್ಕೆ ಮಾರುಕಟ್ಟೆ **ಅಭಿವೃದ್ಧಿ** ಸಹಾಯವನ್ನು ನೀಡುವುದರೊಂದಿಗೆ ರಫ್ತನ್ನು ಉತ್ತೇಜಿಸಲಾಗುತ್ತಿದೆ. |
| ಈ) | ರಾಜ್ಯದಲ್ಲಿ (MSME) **ಗಳಿಗೆ** ರಾಜ್ಯ ಸರ್ಕಾರ ನೀಡಿರುವ ಪ್ರಸ್ತಾವಿ**ತ ತೆರಿಗೆ** ವಿನಾಯಿತಿಗಳ ಬಗ್ಗೆ **ವಿವರ** ನೀಡುವುದು; | ಕರ್ನಾಟಕ ಕೈಗಾರಿಕಾ ನೀತಿ **2014–19** ರನ್ವಯ ರಾಜ್ಯದಲ್ಲಿ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಸರ್ಕಾರ**ವು ಈ ಕೆಳಗಿನ** ತೆರಿಗೆ ವಿನಾಯಿತಿಯನ್ನು ನೀಡುತ್ತಿದೆ.<br><br>**1. ವಿದ್ಯುತ್ ತೆರಿಗೆ ವಿನಾಯಿತಿ:**<br>ಉದ್ಯಮಶೀಲರು ಹೊಸ, **ವಿಸ್ತರಣಾ,** ವೈರುಧ್ಯೀಕರಣ ಅಥವಾ ಆಧುನೀಕರಣ ಕಾರ್ಯಕ್ರಮದಡಿಯಲ್ಲಿ **ಸ್ಥಾಪಿಸುವ ಸೂಕ್ಷ್ಮ,** ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ |

ಶೇ 100 ರಷ್ಟು ವಿದ್ಯುತ್ ತೆರಿಗೆ ವಿನಾಯಿತಿಯನ್ನು ಕನಿಷ್ಟ 4 ವರ್ಷದಿಂದ ಗರಿಷ್ಟ 8 ವರ್ಷಗಳ ವರೆಗೆ ಉದ್ಯಮಶೀಲನ ವರ್ಗದ ಆಧಾರದ ಮೇಲೆ ನೀಡಲಾಗುವುದು.

| ವರ್ಗ | % | | ಹೈದರಾಬಾದ್-ಕರ್ನಾಟಕ ಅಲ್ಲದ ಪ್ರದೇಶ | | | ಹೈ-ಕರ್ನಾಟಕ ಪ್ರದೇಶ | |
|---|---|---|---|---|---|---|---|
| | | ವಲಯ 1 | ವಲಯ 2 | ವಲಯ 3 | ವಲಯ 4 | ವಲಯ 1 | ವಲಯ 2 |
| ಸಾಮಾನ್ಯ | 100 | 6 ವರ್ಷ | 5 ವರ್ಷ | 4 ವರ್ಷ | ಇಲ್ಲ | 7 ವರ್ಷ | 6 ವರ್ಷ |
| ಅಲ್ಪ ಸಂಖ್ಯಾತರು. ಹಿಂದುಳಿದ ವರ್ಗ. ವಿಕಲಚೇತನ. ಮಾಜಿ. ಸೈನಿಕ. ಪರಿಶಿಷ್ಟ. ಜಾತಿ. ಪರಿಶಿಷ್ಟ. ಪಂಗಡ. ಮಹಿಳೆ. | 100 | 7 ವರ್ಷ | 6 ವರ್ಷ | 5 ವರ್ಷ | 4 ವರ್ಷ | 8 ವರ್ಷ | 7 ವರ್ಷ |

2. ಕರ್ನಾಟಕ ಕೃಷಿ ವಾಣಿಜ್ಯ ಮತ್ತು ಆಹಾರ ಸಂಸ್ಕರಣಾ ನೀತಿ-2015 ರನ್ವಯ ರಾಜ್ಯದಲ್ಲಿ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ ಸರ್ಕಾರವು ಆರಂಭಿಕ 8 ವರ್ಷಗಳವರೆಗೆ ವಿದ್ಯುತ್ ತೆರಿಗೆ ವಿನಾಯಿತಿಯನ್ನು ನೀಡುತ್ತಿದೆ.

| | | |
|---|---|---|
| ಉ) | ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕಂಪನಿಗಳು ತ್ರೈಮಾಸಿಕವಾಗಿ ಜಿ.ಎಸ್.ಟಿ.ಗಳನ್ನು ಪಾವತಿಸಲು ರಾಜ್ಯ ಸರ್ಕಾರ ಮುಂದಾಗುವುದೇ? | ಜಿಎಸ್‌ಟಿ ಅನುಷ್ಠಾನದ ನಂತರ ಕೆಲವು ತೊಂದರೆಗಳು ಉಂಟಾಗಿದೆಯೆಂದು ಕೈಗಾರಿಕಾ ಸಂಘ ಸಂಸ್ಥೆಗಳು ಮನವಿಯನ್ನು ಕೇಂದ್ರ ಸರ್ಕಾರದ ಸಚಿವರಿಗೆ ಸಲ್ಲಿಸಿರುತ್ತಾರೆ. ತದನಂತರದಲ್ಲಿ ಜಿಎಸ್‌ಟಿ ಪ್ರಕ್ರಿಯೆಲ್ಲೂ ಸಾಕಷ್ಟು ಮಾರ್ಪಾಟುಗಳನ್ನು ಮಾಡಲಾಗಿರುತ್ತದೆ. |

ಸಿಐ 52 ಸಿಎಸ್‌ಸಿ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ